

# ಅಜ್ಜಿಯ ಕನ್ನಡಕ

ಲೇಖಕಿ: ನೋನಿ

ಚಿತ್ರಗಳು: ತನಯ ವ್ಯಾಸ್

ಹಂತ ೧

Original Story in English **'Grandma's Glasses'** by Noni
Illustrations: Tanaya Vyas
**'Ajjiya Kannadaka'** — Kannada Translation by Geetha M.


First Kannada Edition: 2015

ISBN: 978-93-5022-285-0

Typesetting and layout: Pratham Books, Bengaluru

Printed by: Rave India, New Delhi

Published by: Pratham Books
**www.prathambooks.org**

**Registered office:**
PRATHAM BOOKS
#621, 2nd Floor, 5th Main, OMBR Layout
Banaswadi, Bengaluru 560 043
T: +91 80 42052574 / 41159009

**Regional Office:**
New Delhi
T: +91 11 41042483

**The development of this book has been supported by**
**HDFC Asset Management Company Limited**
***A joint Venture with Standard Life Investments***








PRATHAM BOOKS

# ಅಜ್ಜಿಯ ಕನ್ನಡಕ

ಲೇಖಕಿ: ನೋನಿ
ಚಿತ್ರಗಳು: ತನಯ ವ್ಯಾಸ್
ಕನ್ನಡ ಅನುವಾದ: ಗೀತ ಎಮ್.







ಅಜ್ಜಿ ತಮ್ಮ ಕನ್ನಡಕ ಕಳೆಯುತ್ತಿರುತ್ತಾರೆ. “ಅದನ್ನು ನಾನೆಲ್ಲಿ ಇಟ್ಟೆ?” ಎಂದು ಕೇಳುತ್ತಲೇ ಇರುತ್ತಾರೆ. ಕನ್ನಡಕ ಇಲ್ಲದೆ ಅವರು ತಮ್ಮ ಕನ್ನಡಕವನ್ನು ಹುಡುಕಲು ಆಗುವುದಿಲ್ಲ.



ಅದಕ್ಕಾಗಿ ಅವರಿಗೆ ನಾನು ಬೇಕು. ಅವರ ಕಣ್ಣಾಗಿರಲು,
ಕನ್ನಡಕವನ್ನು ಹುಡುಕಲು!



ಕೆಲವೊಮ್ಮೆ ಅವರ ಕನ್ನಡಕ ಸ್ನಾನದ ಮನೆಯಲ್ಲಿರುತ್ತದೆ.
ಅಥವಾ ಅವರ ಮಂಚದ ಮೇಲೆ. ಅಥವಾ ಅವರ ತಲೆಯ ಮೇಲೆ.

ಆಗ ನಾನು ಹೇಳುವೆ "ಅಜ್ಜಿ, ಅದು ನಿನ್ನ ತಲೆಯ ಮೇಲಿದೆ!"



“ಅಯ್ಯೋ! ಎಂಥ ಪೆದ್ದಿ ನಾನು. ಧನ್ಯವಾದಗಳು ಜಾಣೆ,” ಎಂದು ಅಜ್ಜಿ ಕಿಲಕಿಲನೆ ನಗುತ್ತಾ ಹೇಳುತ್ತಾರೆ.

ಆದರೆ, ಈ ಬಾರಿ ನನಗೆ ಅಜ್ಜಿಯ ಕನ್ನಡಕ ಇನ್ನೂ ಸಿಕ್ಕಿಲ್ಲ.



ನಾನು ಎಲ್ಲಾ ಕಡೆ ಹುಡುಕಿದ್ದಾಗಿದೆ. ಎಲ್ಲಾ ಮಾಮೂಲು ಜಾಗಗಳಲ್ಲಿಯೂ...

ಅವರ ತಲೆಯ ಮೇಲೆ, ಸ್ನಾನದ ಮನೆಯಲ್ಲಿ, ಅವರ ಕಪಾಟಿನಲ್ಲಿ, ಪೂಜೆಯ ಹಲಗೆಯ ಮೇಲೆ.



ಅವರ ಮೆಚ್ಚಿನ ಕುರ್ಚಿಯ ಕೆಳಗೆ, ಊಟದ ಮೇಜಿನ ಮೇಲೆ... ಉಹುಂ...
ಕನ್ನಡಕ ಇಲ್ಲ. ಅದು ಎಲ್ಲಿ ಇರಬಹುದು?



ಸರಿ, ನಾನೀಗ ಒಬ್ಬ ಒಳ್ಳೆಯ ಪತ್ತೆದಾರಳಾಗಲು ನಿರ್ಧರಿಸಿದೆ. ಅಜ್ಜಿ ದಿನವಿಡೀ ಏನೆಲ್ಲ ಮಾಡಿದರು ಎಂದು ತಿಳಿಯುವ ನಿರ್ಧಾರ ಮಾಡಿದೆ.



“ನಾನಿವತ್ತು ಹೆಚ್ಚು ಏನೂ ಮಾಡಿಲ್ಲ. ವೀಣಾ ಅವರ ಅತ್ತೆಯು ಮನೆಗೆ ಬಂದರು. ಅವರೆಷ್ಟು ಹರಟೆ ಹೊಡೆಯುವವರು! ನಾವು ಅದೆಷ್ಟೋ ಕಪ್ ಚಹಾ ಕುಡಿದೆವು. ಜೊತೆಗೆ ಅವರು ನಿನ್ನ ತಾಯಿ ಮಾಡಿದ ಎಲ್ಲ ಲಾಡುಗಳನ್ನೂ ತಿಂದುಬಿಟ್ಟರು,” ಎಂದರು ಅಜ್ಜಿ.



ರಾಜು ಹೇಳಿದ, "ಅಜ್ಜಿಗೆ ಇವತ್ತು ಬಿಡುವೇ ಇರಲಿಲ್ಲ. ಅವರು ಮುಖ್ಯಮಂತ್ರಿಗಳಿಗೆ ತಮ್ಮ ಪಿಂಚಣಿ ಬಗ್ಗೆ ಕಾಗದ ಬರೆದರು."

ಅಮ್ಮ ಹೇಳಿದಳು, "ಅವರು ತುಂಬ ಹೊತ್ತು ನಿನ್ನ ಚಿಕ್ಕಮ್ಮನ ಜೊತೆ ಮಾತನಾಡಿದರು. ರಾಜುವಿನ ಸ್ವೆಟರ್ ಹೆಣೆದು ಮುಗಿಸಿದರು. ನಂತರ, ಒಂದು ಚಿಕ್ಕ ವಾಯು ಸಂಚಾರಕ್ಕೆ ಹೋದರು."



ಈಗ ನನಗೆ ಕೆಲವು ಸುಳಿವುಗಳು ಸಿಕ್ಕವು. ನಾನು ತಕ್ಷಣ ಈ ಹೊಸ ಜಾಗಗಳಲ್ಲಿ ಹುಡುಕಿದೆ.

ಆಹಾ! ನನಗೆ ಕಾಣೆಯಾಗಿದ್ದ ಕನ್ನಡಕ ಸಿಕ್ಕಿತು!



ಕನ್ನಡಕವನ್ನು ಉಣ್ಣೆಯಲ್ಲಿ ಸುತ್ತಿ ತಮ್ಮ ಪೆನ್ನಿನ ಪಕ್ಕದಲ್ಲಿ, ಫೋನಿನ ಕೆಳಗೆ ಮೇಜಿನ ಮೇಲೆ ಇಟ್ಟಿದ್ದರು. ಜೊತೆಗೆ ಅರ್ಧ ತಿಂದು ಬಿಟ್ಟಿದ್ದ ಲಾಡು ಕೂಡ ಅಲ್ಲಿ ಇತ್ತು!

ನಾನು ದುಡ್ಡು ಕೂಡಿಟ್ಟು, ಅಜ್ಜಿಯ ಮುಂದಿನ ಹುಟ್ಟುಹಬ್ಬಕ್ಕೆ ಇನ್ನೊಂದು ಕನ್ನಡಕವನ್ನು ತಂದು ಕೊಡುವೆ!

**Read India**

‘ಪ್ರಥಮ್ ಬುಕ್ಸ್’ಅನ್ನು ಮಕ್ಕಳಲ್ಲಿ ಓದುವ ಹವ್ಯಾಸವನ್ನು ಉತ್ತೇಜಿಸಲು ಇರುವ ರಾಷ್ಟ್ರಮಟ್ಟದ ಕಾರ್ಯಕ್ರಮವಾದ ‘ರೀಡ್ ಇಂಡಿಯಾ’ ಆಂದೋಲನದ ಭಾಗವಾಗಿ 2004ರಲ್ಲಿ ಸ್ಥಾಪಿಸಲಾಯಿತು. ಪ್ರಥಮ್ ಬುಕ್ಸ್ ಒಂದು ಲಾಭಾಪೇಕ್ಷೆ ಇಲ್ಲದಿರುವ ಸಂಸ್ಥೆಯಾಗಿದ್ದು, ಇದು ಭಾರತದ ಹಲವಾರು ಭಾಷೆಗಳಲ್ಲಿ ಮಕ್ಕಳಿಗಾಗಿ ಉತ್ತಮ ಗುಣಮಟ್ಟದ ಪುಸ್ತಕಗಳನ್ನು ಪ್ರಕಟಿಸುತ್ತದೆ. ದೇಶದಾದ್ಯಂತ ಓದುವ ಸಂಭ್ರಮವನ್ನು ಹರಡಲು ಬಯಸುವ ನಮ್ಮ ಧ್ಯೇಯ ‘ಪ್ರತಿ ಮಗುವಿನ ಕೈಯಲ್ಲಿ ಒಂದು ಪುಸ್ತಕ’ ನೋಡುವುದಾಗಿದೆ. ಬನ್ನಿ ನಮ್ಮ ಕೈಜೋಡಿಸಿ – ನಮಗೆ info@prathambooks.org ಗೆ ಇ–ಮೇಲ್ ಮಾಡಿ.

---



ನೋನಿ ಎನ್ನುವುದು ರೋಹಿಣಿ ನೀಲೇಕಣಿ ಅವರು ಮಕ್ಕಳಿಗಾಗಿ ಪುಸ್ತಕಗಳನ್ನು ಬರೆಯುವಾಗ ಬಳಸುವ ಕಾವ್ಯನಾಮ. ನೋನಿ ಅವರು ಒಬ್ಬ ಬರಹಗಾರ್ತಿ ಮತ್ತು ಜನೋಪಕಾರಿ. ಜೊತೆಗೆ ಪ್ರಥಮ್ ಬುಕ್ಸ್‌ನ ಸಹ ಸಂಸ್ಥಾಪಕರೂ ಹೌದು.



ತನಯ ವ್ಯಾಸ್ ಅಹಮದಾಬಾದಿನ ‘ನ್ಯಾಷನಲ್ ಇನ್ಸ್ಟಿಟ್ಯೂಟ್ ಆಫ್ ಡಿಸೈನ್’ನಲ್ಲಿ ತರಬೇತಿ ಹೊಂದಿದ ನುರಿತ ಚಿತ್ರ ಕಲಾವಿದೆ. ಅವರ ದಿನಚರಿ ವಕ್ರ ರೇಖೆಗಳಿಂದ ಪ್ರಾರಂಭವಾಗಿ ಅವುಗಳೊಂದಿಗೇ ಮುಗಿಯುತ್ತದೆ. ಚಾಕೊಲೇಟ್‌ಗಳಲ್ಲಿ ಈಜಾಡುವುದು, ಪದ್ಯಗಳನ್ನು ಬರೆಯುವುದು, ಚಂದ್ರನ ಮೇಲೆ ನೆಗೆಯುವುದು, ಬೆಕ್ಕುಗಳೊಂದಿಗೆ ಹಾಡುವುದು, ಗೋಡೆಗಳ ಮೇಲೆ ಚಿತ್ರ ರಚಿಸುವುದು, ಹೀಗೆ ಪ್ರತಿದಿನ ಏನಾದರೊಂದು ಹೊಸ ಚಿತ್ರ ಸೃಷ್ಟಿಸುವುದೆಂದರೆ ಇವರಿಗೆ ಬಹಳ ಖುಷಿ.

**ಅಜ್ಜಿ ತಮ್ಮ ಕನ್ನಡಕವನ್ನು ಯಾವಾಗಲೂ ಕಳೆದುಕೊಳ್ಳುತ್ತಿರುತ್ತಾರೆ. ಕೆಲವೊಮ್ಮೆ ಅದನ್ನು ಹುಡುಕಿಕೊಡಲು ಅವರಿಗೆ ಚಾಣಾಕ್ಷ ಪತ್ತೇದಾರಳ ಅಗತ್ಯವಿದೆ!**

**ಓದಲು ಕಲಿಯುವುದು – ಹಂತ ಹಂತವಾಗಿ. ಈ ಪುಸ್ತಕವು ಓದುವಿಕೆಯ ಹಂತ ೩ಕ್ಕೆ ಸೇರಿದೆ.**

**೧**

**ಈಗ ತಾನೆ ಓದಲು ಆರಂಭಿಸಿರುವ / ಜೋರಾಗಿ ಓದಲು**
ಕತೆಗಳನ್ನು ಕೇಳಲು ಹಾಗು ಓದುವುದನ್ನು ಪ್ರಾರಂಭಿಸಲು ಕಾತರರಾಗಿರುವ ಸಣ್ಣ ಮಕ್ಕಳಿಗಾಗಿ

**೨**

**ಓದಲು ಕಲಿಯುತ್ತಿರುವ ಮಕ್ಕಳಿಗಾಗಿ**
ಪದಗಳನ್ನು ಗುರುತಿಸಿ ಓದುವ, ಇತರರ ಸಹಾಯದಿಂದ ಹೊಸ ಪದಗಳನ್ನು ಓದುವ ಮಕ್ಕಳಿಗಾಗಿ

**೩**

**ಸ್ವಇಚ್ಛೆಯಿಂದ ಓದುವ ಮಕ್ಕಳಿಗಾಗಿ**
ಇನ್ನೊಬ್ಬರ ಸಹಾಯ ಇಲ್ಲದೇ ತಾವೆ ಓದುವ ಮಕ್ಕಳಿಗಾಗಿ

**೪**

**ಸುಲಭವಾಗಿ ಓದುವ ಸಾಮರ್ಥ್ಯವಿರುವ ಮಕ್ಕಳಿಗಾಗಿ**
ವಿಶ್ವಾಸದಿಂದ ಓದಬಲ್ಲಂತಹ ದೊಡ್ಡ ಮಕ್ಕಳಿಗಾಗಿ



**PRATHAM BOOKS**

ಪ್ರಥಮ್ ಬುಕ್ಸ್ ಒಂದು ಲಾಭಾಪೇಕ್ಷೆ ಇಲ್ಲದಿರುವ ಸಂಸ್ಥೆಯಾಗಿದ್ದು, ಮಕ್ಕಳಲ್ಲಿ ಓದುವ ಹವ್ಯಾಸವನ್ನು ಉತ್ತೇಜಿಸಲು, ಭಾರತದ ಹಲವಾರು ಭಾಷೆಗಳಲ್ಲಿ ಉತ್ತಮ ಗುಣಮಟ್ಟದ ಪುಸ್ತಕಗಳನ್ನು ಪ್ರಕಟಿಸುತ್ತದೆ.

www.prathambooks.org

Grandma's Glasses
(Kannada)
MRP: ₹ 30.00

ISBN 978-93-5022-285-0

